# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಮಾನ್ಯ ಶ್ರೀ ಹೆಚ್.ಎಂ. ರಮೇಶ ಗೌಡ
(ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 466 (538)

ಉತ್ತರ ದಿನಾಂಕ : 11.12.2020.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸಕ್ತ ಸಾಲಿನಲ್ಲಿ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಯೋಜನೆಗೆ ಮೀಸಲಿಟ್ಟ ಹಣವೆಷ್ಟು; ಎಷ್ಟು ಅನುದಾನ ಬಳಕೆಯಾಗಿದೆ. ಹಾಗೂ ಎಷ್ಟು ಗುರಿ ಸಾಧಿಸಲಾಗಿದೆ; | ಪ್ರಸಕ್ತ 2020-21ನೇ ಸಾಲಿನ ಆಯವ್ಯಯದಲ್ಲಿ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯವತಿಯಿಂದ ಅನುಷ್ಠಾನ ಗೊಳಿಸುತ್ತಿರುವ, ಜಲ್ ಜೀವನ್ ಮಿಷನ್ (JJM) ಯೋಜನೆಗೆ ಲೆಕ್ಕ ಶೀರ್ಷಿಕೆ 2215-01-102-9-08 ಮತ್ತು 4215-01-102-2-01 ಅಡಿ ಒಟ್ಟು ರೂ.242985.58 ಲಕ್ಷಗಳನ್ನು ಒದಗಿಸಲಾಗಿದೆ. ನವೆಂಬರ್-2020ರ ಅಂತ್ಯಕ್ಕೆ ಕೇಂದ್ರ ಮತ್ತು ರಾಜ್ಯದಪಾಲಿನ ಅನುದಾನ ಒಳಗೊಂಡಂತೆ ಯೋಜನಾ ಅನುಷ್ಠಾನಕ್ಕಾಗಿ ಒಟ್ಟು ರೂ.129263.75 ಲಕ್ಷಗಳನ್ನು ವೆಚ್ಚ ಭರಿಸಲಾಗಿದೆ. ನವೆಂಬರ್-2020 ರ ಅಂತ್ಯಕ್ಕೆ ರೂ.97245.95 ಲಕ್ಷಗಳ ಆರ್ಥಿಕ ಗುರಿಗೆ ಎದುರಾಗಿ ರೂ.129263.77 ಲಕ್ಷಗಳ ಗುರಿ ಸಾಧಿಸಲಾಗಿದೆ.<br><br>ಹಾಗೂ<br><br>ಸ್ವಚ್ಛ ಭಾರತ್ ಮಿಷನ್ (ಗ್ರಾಮೀಣ) ಯೋಜನೆಯಡಿ 2020-21ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2215-01-198-6-01-300 ಅಡಿ ರೂ.23586.35 ಲಕ್ಷಗಳನ್ನು ಒದಗಿಸಿದ್ದು ಇದರಲ್ಲಿ ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನ ಸೇರಿರುತ್ತದೆ. ಕೇಂದ್ರ ಸರ್ಕಾರ ಕಾರ್ಯಕ್ಷಮತೆ ಆಧಾರಿತ ಪ್ರೋತ್ಸಾಹಧನ ಅನುದಾನ ರೂ.12630.68 ಲಕ್ಷಗಳನ್ನು ಬಿಡುಗಡೆಗೊಳಿಸಿರುತ್ತದೆ. ಈ ಅನುದಾನವನ್ನು ರಾಜ್ಯ ಸರ್ಕಾರದ ಮೂಲಕ ಡ್ರಾ ಮಾಡಿ ಬೇಡಿಕೆಯನುಸಾರ ಜಿಲ್ಲೆಗಳಿಗೆ ಯೋಜನಾ ಅನುಷ್ಠಾನಕ್ಕಾಗಿ ಬಿಡುಗಡೆಗೊಳಿಸಲಾಗಿದೆ. ಪ್ರಸಕ್ತ ಸಾಲಿನಲ್ಲಿ ಆರಂಭಿಕ ಶಿಲ್ಕು ಸೇರಿದಂತೆ ನವಂಬರ್-2020 ರ ಅಂತ್ಯಕ್ಕೆ ರೂ. 30394.46 ಲಕ್ಷಗಳನ್ನು ಯೋಜನಾ ಅನುಷ್ಠಾನಕ್ಕಾಗಿ ವೆಚ್ಚಮಾಡಲಾಗಿದೆ. ನವೆಂಬರ್-2020 ರ ಅಂತ್ಯಕ್ಕೆ ರೂ.72468.69 ಲಕ್ಷಗಳ ಆರ್ಥಿಕ ಗುರಿಗೆ ಎದುರಾಗಿ ರೂ.30394.46 ಲಕ್ಷಗಳ ಗುರಿ ಸಾಧಿಸಲಾಗಿದೆ. |
| ಆ) | ಸುವರ್ಣ ಗ್ರಾಮೋದಯ ಮತ್ತು ಗ್ರಾಮಗಳಿಗೆ ವಿಕಾಸ ಕಾರ್ಯಕ್ರಮಗಳಿ ಕಳೆದ ಎರಡು ವರ್ಷಗಳಿಂದ ಎಷ್ಟು ಹಣ ಮೀಸಲಿಡಲಾಗಿದೆ; ಎಷ್ಟು ಪ್ರಗತಿ ಸಾಧಿಸಲಾಗಿದೆ; (ವಿವರ ನೀಡುವುದು) | ಸುವರ್ಣ ಗ್ರಾಮೋದಯ ಹಾಗೂ ಗ್ರಾಮ ವಿಕಾಸ ಯೋಜನೆಯು ಮುಕ್ತಾಯಗೊಂಡಿದ್ದು, 2019-20 ಮತ್ತು 2020-21ನೇ ಸಾಲಿನಲ್ಲಿ ಯಾವುದೇ ಹಣ ಮೀಸಲಿರಿಸಿರುವುದಿಲ್ಲ.<br><br>2017-18ನೇ ಸಾಲಿನಿಂದ ಮುಖ್ಯಮಂತ್ರಿ ಗ್ರಾಮ ವಿಕಾಸ ಯೋಜನೆಯು ಚಾಲ್ತಿಯಲ್ಲಿದ್ದು, ಪ್ರತಿ ಗ್ರಾಮಕ್ಕೆ ರೂ.1.00 ಕೋಟಿಯಂತೆ 1000 ಗ್ರಾಮಗಳನ್ನು ಆಯ್ಕೆ ಮಾಡಿ ರೂ.1000.00 ಕೋಟಿಗಳನ್ನು ಹಂಚಿಕೆ ಮಾಡಲಾಗಿದೆ.<br><br>ಈ ಯೋಜನೆಯಡಿ ಇದುವರೆಗೂ ರೂ.735.27 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ರೂ.264.73 ಕೋಟಿಗಳು ಬಿಡುಗಡೆಗೆ ಬಾಕಿ ಇರುತ್ತದೆ. |
| ಇ) | ಕಳೆದೆರಡು ಸಾಲಿನಲ್ಲಿ ಗ್ರಾಮೀಣ ಮೂಲ ಸೌಕರ್ಯ, ಸೌರ ಬೆಳಕು ಮತ್ತು ರಾಷ್ಟ್ರೀಯ ಜೈವಿಕ ಅನಿಲ ಮತ್ತು ಗೊಬ್ಬರ ನಿರ್ವಹಣಾ ಕಾರ್ಯಕ್ರಮಗಳ ಆನ್‌ಲೈನ್ ಸೇವೆ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿದೆಯೇ; (ಮಾಹಿತಿ ನೀಡುವುದು) | 2018-19ನೇ ಸಾಲಿನಿಂದ ಸೌರ ಬೆಳಕು ಯೋಜನೆಯನ್ನು ಕೈಬಿಡಲಾಗಿದೆ.<br><br>ರಾಷ್ಟ್ರೀಯ ಜೈವಿಏಕ ಅನಿಲ ಮತ್ತು ಗೊಬ್ಬರ ನಿರ್ವಹಣಾ ಕಾರ್ಯಕ್ರಮವು ಫಲಾನುಭವಿಗಳ ಕಾರ್ಯಕ್ರಮವಾಗಿರುವುದರಿಂದ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಘಟಕಗಳ ನಿರ್ವಹಣೆಯು 5 ವರ್ಷ ಅವಧಿಯನ್ನು ಒಳಗೊಂಡಿರುತ್ತದೆ. ಈ ಅವಧಿಯಲ್ಲಿ ಘಟಕಗಳ ಕಾರ್ಯಕ್ಷಮತೆಯಲ್ಲಿ ಕಂಡುಬಂದ ದೋಷಗಳನ್ನು ಸಂಬಂಧಿತ Turn Key Agency ಗಳು ಸರಿಪಡಿಸಬೇಕಿರುತ್ತದೆ ಹಾಗೂ ಸಮರ್ಪಕವಾಗಿ ಕೆಲಸ ನಿರ್ವಹಿಸಲಾಗುತ್ತಿರುವುದನ್ನು ಜಿಲ್ಲಾ ಪಂಚಾಯತ್ ಮಟ್ಟದಲ್ಲಿ ಉಸ್ತುವಾರಿ ಮಾಡಲಾಗುತ್ತಿದೆ. |

| | | |
|---|---|---|
| ಈ) | ಪ್ರಸಕ್ತ ಸಾಲಿನಲ್ಲಿ ರಾಜ್ಯದ ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿಗೆ ಮೀಸಲಿಟ್ಟ ಹಣವೆಷ್ಟು; ಬಳಕೆಯಾದ ಹಣವೆಷ್ಟು; ಸಾಧಿಸಲಾದ ಪ್ರಗತಿಯ ಪ್ರಮಾಣವೆಷ್ಟು? (ಸಂಪೂರ್ಣ ಮಾಹಿತಿ ನೀಡುವುದು) | ಪ್ರಸಕ್ತ ಸಾಲಿನಲ್ಲಿ ರಾಜ್ಯದ ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿಯ ಯೋಜನೆಗಳಲ್ಲಿ ಒಂದಾದ ರಾಷ್ಟ್ರೀಯ ಜೈವಿಕ ಅನಿಲ ಮತ್ತು ಗೊಬ್ಬರ ನಿರ್ವಹಣಾ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ರಾಜ್ಯ ಆಯವ್ಯಯದಡಿ ಈ ವರ್ಷ ಅನುದಾನ ಒದಗಿಸಿರುವುದಿಲ್ಲ.<br><br>ಸದರಿ ಕಾರ್ಯಕ್ರಮಕ್ಕಾಗಿ ಕೇಂದ್ರ ಸರ್ಕಾರವು ಪ್ರಸಕ್ತ ಸಾಲಿನಲ್ಲಿ ರೂ.420.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಜಿಲ್ಲಾ ಪಂಚಾಯತಿಗಳಿಗೆ ದಿನಾಂಕ 10-12-2020 ರಂದು ಅನುದಾನ ಬಿಡುಗಡೆ ಮಾಡಿದೆ. |

ಸಂ:ಗ್ರಾಕುನೀ&ನೈಇ/124/ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**